# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ ಕೆಆರ್ಎನ್ಎಸ್ - 19

3ನೇ ವರ್ಷ 28ನೇ ಸಂಚಿಕೆ ಕೊಪ್ಪ 17-3-1985 ಭಾನುವಾರ ಬೆಲೆ 40 ಪೈಸೆ


# ರಾಜ್ಯ ಮಂತ್ರಿಮಂಡಲ ವಿಸ್ತರಣೆ

## ಗೋವಿಂದ ಗೌಡ ಪ್ರಾಥಮಿಕ ಶಿಕ್ಷಣ, ವಯಸ್ಕರ ಶಿಕ್ಷಣ ರಾಜ್ಯ ಸಚಿವರು

**ಬೆಂಗಳೂರು: ರಾಜ್ಯದ ಜನತಾ ಮಂತ್ರಿ ಮಂಡಲವನ್ನು ಶುಕ್ರವಾರ ವಿಸ್ತರಿಸಿ, 12 ಜನ ಕ್ಯಾಬಿನೆಟ್ ದರ್ಜೆಯ ಮಂತ್ರಿಗಳನ್ನು ಮತ್ತು 15 ಜನ ರಾಜ್ಯಸಚಿವರನ್ನು ಹೊಸದಾಗಿ ಸೇರಿಸಿಕೊಳ್ಳಲಾಯಿತು.**

**ಶೃಂಗೇರಿ ಕ್ಷೇತ್ರದ ಶಾಸಕ ಗೋವಿಂದ ಗೌಡರು ಪ್ರಾಥಮಿಕ ಶಿಕ್ಷಣ ಮತ್ತು ವಯಸ್ಕರ ಶಿಕ್ಷಣ ಖಾತೆಯ (ಸ್ವತಂತ್ರ ನಿರ್ವಹಣೆ) ರಾಜ್ಯ ಸಚಿವ ಹುದ್ದೆ ಪಡೆದಿದ್ದಾರೆ.**

ಕ್ಯಾಬಿನೆಟ್ ಮಂತ್ರಿಗಳಲ್ಲಿ ಸಿ. ಭೈರೇಗೌಡ ಮಾತ್ರ ಹೊಸಬರು. ಉಳಿದವರೆಂದರೆ ಕಾಚಯ್ಯ, ನಜೀರ್ ಸಾಬ್, ಬೊಮ್ಮಾಯಿ, ದೇವೇಗೌಡ, ಪಟೇಲ್, ವಿ. ಎಲ್. ಪಾಟೀಲ್, ಲಕ್ಷ್ಮೀಸಾಗರ್, ಜಾಲಪ್ಪ, ಮಂಜುನಾಥ್, ಹೆಚ್.ಎಲ್.ತಿಮ್ಮೇಗೌಡ ದೇಶಮುಖ್,ಬಸವಣ್ಯಪ್ಪ ಮತ್ತುರಘುಪತಿ

ಸಹಾಯಕ ಮಂತ್ರಿಗಳು: ಹೆಚ್. ಜಿ. ಗೋವಿಂದ ಗೌಡ, ಆರ್.ವಿ. ದೇಶಪಾಂಡೆ, ಡಾ|| ಪುಷ್ಪಾವತಿ, ಬಸವರಾಜ ಪಾಟೀಲ್ ಅನ್ವೂರೆ, ಎಸ್. ವೀರಣ್ಣ, (ಈ ಐವರೂ ಹೊಸಬರು), ಜೀವಿಜಯ, ಜಿಗಜಿಣಗಿ, ಜೀವರಾಜ ಆಳ್ವ, ಪಿ. ಜಿ. ಆರ್. ಸಿಂಧ್ಯ, ಎಂ.ಪಿ.ಪ್ರಕಾಶ್, ಯಾವಗಲ್, ಇನಾಂದಾರ್, ಸಿದ್ಧರಾಮಯ್ಯ, ಸೋಮಶೇಖರ್ ಮತ್ತು ವೈ. ಕೆ. ರಾಮಯ್ಯ.

## ‘ಕಾಡ್ಗಿಚ್ಚು’ಗಳು, ಬೆಂಕಿ ಅನಾಹುತಗಳು

ಕೊಪ್ಪ: ನ. ರಾ. ಪುರ ಮತ್ತು ಕೊಪ್ಪ ತಾ||ಗಳ ಹಲವು ಕಡೆಗಳಲ್ಲಿ ‘ಕಾಡ್ಗಿಚ್ಚು’ ಮತ್ತು ಬೆಂಕಿ ಅನಾಹುತಗಳ ಹಲವು ಪ್ರಕರಣಗಳು ವರದಿಯಾಗಿವೆ.

ಕೊಪ್ಪ ತಾ|| ನುಗ್ಗಿ ಗ್ರಾಮದ ಕೂಗೆಯಲ್ಲಿ ಖಾಸಗಿ ಡ್ರೈವರ್ ಒಬ್ಬರ ಮನೆ, ಬಂಡಿಗಡಿಯ ಬಳಿ ಒಂದು ಹುಲ್ಲಿನ ಬಣವೆ, ಎತ್ತಿನಹಟ್ಟಿಯಲ್ಲಿ ದನದ ಕೊಟ್ಟಿಗೆ, ಕಾಚಕಲ್ ಬಳಿ ಕಟ್ಟಡ ಕೆಲಸಗಾರರೊಬ್ಬರ ಮನೆ ಇವೆಲ್ಲ ಬೆಂಕಿಗೆ ಆಹುತಿಯಾಗಿದ್ದರೆ, ಜೇರುಕೊಡಿಗೆ ಹತ್ತಿರ ಎಸ್ಟೇಟೊಂದಕ್ಕೆ ಬೆಂಕಿ ಬಿದ್ದು 30 ಸಾವಿರ ರೂ.ನಷ್ಟ ನಷ್ಟವಾಯಿತೆನ್ನಲಾಗಿದೆ.

ಅದ್ದಡ ಗ್ರಾಮದಲ್ಲಿ ಕೋಟೆ ಗುಡ್ಡಕ್ಕೆ ಬಿದ್ದ ಬೆಂಕಿ, ಹತ್ತಿರದಲ್ಲಿ ಅರಣ್ಯ ಇಲಾಖೆಯ ಪ್ಲಾಂಟೇಶನ್ನಿಗೆಂದು ಬಿಟ್ಟಿರುವ ಮಧ್ಯಮ ಪ್ರಮಾಣದ ಕಾಡಿಗೆ ಆವರಿಸಿ, ಸಾಕಷ್ಟು ನಷ್ಟ ಆಗಿರಬಹುದೆಂದು ಹರಿಹರಪುರದಲ್ಲಿ ಸುದ್ದಿ ಹರಡಿತ್ತು

ಈ ಎಲ್ಲ ಬೆಂಕಿಯಿಂದಾಗಿ ಮಾ. 8ರಿಂದ 5 ದಿನಗಳ ಕಾಲ ಹರಿಹರಪುರ, ಸಿಗಡಾಳು ಘಾಟಿಯಿಂದ ಹಿಡಿದು, ಕೊಪ್ಪ ಮತ್ತು ಸುತ್ತಲೂ ಕಣ್ಣಿಗೆ ಕಾಣುವಷ್ಟು ದೂರವೂ ದಟ್ಟವಾಗಿ ಹೊಗೆ ವ್ಯಾಪಿಸಿದ್ದು, ಕಣ್ಣುರಿ ಮುಂತಾದ ಕೆಟ್ಟ ಪರಿಣಾಮಗಳನ್ನುಂಟುಮಾಡಿತು.

ನ. ರಾ. ಪುರ ತಾ|| ಮುತ್ತಿನಕೊಪ್ಪದ ಬಳಿ ಕಣಿವೆ ಎಂಬಲ್ಲಿ ಕೃಷಿ ಕಾರ್ಮಿಕರೊಬ್ಬರ ಮನೆ ಮಾ. 9ರಂದು ಭಸ್ಮವಾಗಿ ಕೋಣಕೆರೆ, ಕಣಿವೆ, ಹಂಪಿನಮನೆ, ವಾಲ್ಲಂದೂರು ಸರಹದ್ದಿನಲ್ಲಿ ಕಾಡು ಮತ್ತು ಅಡಿಕೆ ಕೋಟೆಗಳು ಹಾನಿಗೀಡಾಗಿವೆಯೆಂದೂ, ಸುತ್ತಮುತ್ತ ಬೆಂಕಿ ಇನ್ನೂ ಉರಿಯುತ್ತಲೇ ಇದ್ದು ಯಾವ ಸಮಯದಲ್ಲಾದರೂ ಮನೆಗಳಿಗೆ ಹೊತ್ತಿಕೊಳ್ಳಬಹುದೆಂಬ ಭಯದಲ್ಲಿ ಹಳ್ಳಿಗರು ನಿದ್ದೆಗೆಟ್ಟು ಕಾಯುತ್ತಿದ್ದಾರೆಂದೂ ಅಲ್ಲಿನ ಓದುಗರೊಬ್ಬರು ಮಾ. 10ರಂದು ಬರೆದ ಪತ್ರದಲ್ಲಿ ತಿಳಿಸಿದ್ದಾರೆ.

ಹೆಚ್ಚಿನ ಸಂದರ್ಭಗಳಲ್ಲಿ ಈ ಬೆಂಕಿ ನೈಸರ್ಗಿಕವಾದ ಕಾಡ್ಗಿಚ್ಚಾಗಿರದೆ ಮನುಷ್ಯರ ದುರಾಸೆ, ಅಸಡ್ಡೆ ಅಥವಾ ಅಜಾಗರೂಕತೆಯಿಂದ ಉಂಟಾಗುವುದರಿಂದ ಈ ವಿಷಯದಲ್ಲಿ ಜನಗಳೇ ತಿಳುವಳಿಕಸ್ಥರಾಗಿ ಜಾಗ್ರತೆ ವಹಿಸದಿದ್ದರೆ, **ಯಾರದೋ ತಪ್ಪಿಗೆ ಯಾರೋ ಪ್ರಾಣ ತೆರುತ್ತಾರೆ, ಯಾರೋ ನಿರ್ಗತಿಕರಾಗುತ್ತಾರೆ.**

## ಶೃಂಗೇರಿ ಸುದ್ದಿಗಳು

### ಸಂತೆ ಪುನರಾರಂಭ

ಇಲ್ಲಿ ಈ ಹಿಂದೆ ಪುರಸಭೆಯ ವತಿಯಿಂದ ನಡೆಯುತ್ತಿದ್ದು ನಿಂತು ಹೋಗಿದ್ದ ಸಂತೆಯ ವ್ಯವಸ್ಥೆ ಈಗ ಪುನರಾರಂಭಗೊಂಡಿದ್ದು, ಪ್ರತಿ ಸೋಮವಾರ ಕೆ. ಇ. ಬಿ. ಎದುರಿನ ಮೈದಾನದಲ್ಲಿ ಸಂತೆ ನಡೆಯುತ್ತಿರುವುದಾಗಿ ವರದಿಯಾಗಿದೆ.

### ಬಾಲಕನ ದುರ್ಮರಣ

ಕಲ್ಲು ಕೆಲಸ ಮಾಡುವ ಬಡ ತಂದೆ-ತಾಯಿಗಳ 4 ವರ್ಷದ ಮಗು ಗಣೇಶ ಆನೆಗುಂದದ ಬಳಿ ಉದಯ ಬಸ್ಸಿಗೆ ಸಿಕ್ಕಿ ಸ್ಥಳದಲ್ಲೇ ಸ್ಥಳದಲ್ಲೇ ಸಾವಪ್ಪಿದ್ದಾಗಿ ತಿಳಿದು ಬಂದಿದೆ. ರಸ್ತೆಯ ಬದಿಯಲ್ಲಿದ್ದ ಬಾಲಕನ ಮೇಲೆ ಬಸ್ಸು ಹರಿಯಿತೆನ್ನಲಾಗಿದ್ದು ಶೃಂಗೇರಿಯ ಪೋಲೀಸರು ಬಸ್ ಚಾಲಕನನ್ನು ಬಂಧಿಸಿ ಮುಂದಿನ ಕ್ರಮ ಕೈಗೊಂಡಿದ್ದಾರೆ.

# ಕೊಪ್ಪ ಇಂದಿರಾ ನಗರ ನೀರು ಸಮಸ್ಯೆ ತಾತ್ಕಾಲಿಕ ಪರಿಹಾರ ಭರವಸೆ

ಕೊಪ್ಪ: ಇಲ್ಲಿನ ಕಾಚಕಲ್ ರಸ್ತೆಯಲ್ಲಿ ತ್ವರಿತವಾಗಿ ಬೆಳೆಯುತ್ತಿರುವ ಬಡಾವಣೆಯಾದ ಇಂದಿರಾ ನಗರದಲ್ಲಿ ಕುಡಿವ ನೀರಿನ ಸಮಸ್ಯೆ ಇತ್ತೀಚೆಗೆ ಉಲ್ಬಣಿಸಿ, ಅಲ್ಲಿನ ನಿವಾಸಿಗಳ ತೀವ್ರ ಪ್ರತಿಭಟನೆಗೆ ಮಣಿದ ಪುರಸಭೆಯ ಆಡಳಿತ ವರ್ಗ ಸ್ಥಳಕ್ಕೆ ಭೇಟಿ ನೀಡಿ, ನೀರು ಪೂರೈಕೆಯ ದುಃಸ್ಥಿತಿಗೆ ಕಾರಣಗಳನ್ನು ವಿವರಿಸಿ ಸಮಸ್ಯೆಯನ್ನು ಆದಷ್ಟು ಕಮ್ಮಿ ಮಾಡಲು ಕೆಲವು ಕ್ರಮಗಳನ್ನು ಕೈಗೊಳ್ಳುವ ಆಶ್ವಾಸನೆ ಕೊಟ್ಟ ಪ್ರಸಂಗ ಈಚೆಗೆ ನಡೆಯಿತು.

ಹಾಲಿ ಇಲ್ಲಿನ ನಿವಾಸಿಗಳಲ್ಲಿ ಹೆಚ್ಚಿನವರು ಸಣ್ಣಪುಟ್ಟ ಉದ್ಯೋಗ-ಕಸುಬಿನವರಾಗಿದ್ದು ಅವರೆಲ್ಲರಿಗೆ ಉಪಯುಕ್ತವಾಗುವಂತೆ ಸಂಜೆ 5ರಿಂದ 2 ಗಂಟೆ ಕಾಲ ಈ ಪ್ರದೇಶಕ್ಕೆ ನಲ್ಲಿ ನೀರು ಬಿಡಲಾಗುತ್ತಿದೆ. ಆದರೆ ಈಚಿನ ವಾರಗಳಲ್ಲಿ ನೀರು ಬರುವುದು ಬಹಳ ಕಮ್ಮಿ (ಕೆಲವು ಸಲ ಬಹಳ ಅಪರೂಪ ಕೂಡ) ಆಯಿತಲ್ಲದೆ, ಒಂದೆರಡು ನಲ್ಲಿಗಳಲ್ಲೇ ಎಲ್ಲರೂ ನೀರು ಹಿಡಿದುಕೊಳ್ಳಬೇಕಾದ ಪರಿಸ್ಥಿತಿ ಉಂಟಾಗಿ ದಿನ ನಿತ್ಯ ಜಗಳಗಳಿಗೆ ದಾರಿಯಾಯಿತು.

### “ಪೇಪರ್ನಲ್ಲಿ ಹಾಕಿ”

ಈ ಪರಿಸ್ಥಿತಿಯಿಂದ ರೋಸಿದ ನಿವಾಸಿಗಳು ಮಾ. 9ರ ಸಂಜೆ ಪುರಸಭಾ ಮುಖ್ಯಾಧಿಕಾರಿಗಳನ್ನು ಕಂಡು ವಿಚಾರಿಸಿದಾಗ ಅಲ್ಲಿ ದೊರೆತ ಫಲಿತಾಂಶದಿಂದ (ಪರಸ್ಪರ ದೋಷಾರೋಪಣೆ?) ಅಸಂತುಷ್ಟರಾಗಿ ಪತ್ರಿಕೆ ಕಾರ್ಯಾಲಯಕ್ಕೆ ಬಂದು (ಗಂಡಸು, ಹೆಂಗಸರು ಒಟ್ಟು ಸುಮಾರು 40-50 ಜನ) ದೂರು ಹೇಳಿದರು. ಅವರಿಂದ ಲಿಖಿತ ದೂರು ಪಡೆದು ತೀಕ್ಷ್ಣವಾಗಿ ಪ್ರಕಟಿಸಬೇಕೆಂದು ಅವರ ಅಪೇಕ್ಷೆಯಾಗಿತ್ತು.

ಪತ್ರಿಕೆಯಲ್ಲಿ ತೀಕ್ಷ್ಣವಾಗಿ, ಯಾರನ್ನೋ ಹೊಣೆ ಮಾಡಿ ಪ್ರಕಟಿಸಿದಾಕ್ಷಣ ಸಮಸ್ಯೆ ಬಗೆ ಹರಿಯುವುದಿಲ್ಲವಾದ್ದರಿಂದ, ಸಮಸ್ಯೆಗೆ ಮೂಲ ಕಾರಣ ಏನು, ಪರಿಹಾರಕ್ಕೆ ಮಾರ್ಗೋಪಾಯಗಳೇನಿವೆ, ಕೊಪ್ಪದ ನೀರಿನ ಸಮಸ್ಯೆ ಥಕ್ಕನೆ ಬಗೆ ಹರಿಯುವಂಥದಲ್ಲವಾದ್ದರಿಂದ ತಕ್ಷಣಕ್ಕೆ ಏನು ಮಾಡಬಹುದು ಎಂಬ ಬಗ್ಗೆ ಅವರ ಯೋಚನೆಗಳನ್ನು ವಿಚಾರಿಸಿದೆವು. ಆಗ ಸ್ವಲ್ಪ ಶಾಂತರಾದ ಅವರು ಹಲವು ಸಲಹೆಗಳನ್ನು ಚರ್ಚಿಸಿದರಲ್ಲದೆ, “ನಾಳೆ ಸಂಜೆ 5 ಗಂಟೆಗೆ ಮುಖ್ಯಾಧಿಕಾರಿಗಳು ನಮ್ಮ ಬಡಾವಣೆಗೆ ಬರುತ್ತೇನೆಂದಿದ್ದಾರೆ. ನೀವೂ ಸ್ವಲ್ಪ ಬನ್ನಿ” [illegible]

(4ನೇ ಪುಟಕ್ಕೆ)

## ಶಿವಮೊಗ್ಗ ಅಡಿಕೆ ಪೇಟೆ

‘ವಿವೇಕ’ ಅವರಿಂದ

ತಾರೀಖು : 15-3-1985

ರಾಶಿ: 2795 - 3049

ಬೆಟ್ಟೆ: 2142 - 23[illegible]9

ಗೊರಬಲು: 1500 - 17[illegible]

ಒಂದೆರಡು ವಾರಗಳಿಂದ ಧಾರಣೆಯ ಬದಲಾವಣೆ ಇಲ್ಲದ ವ್ಯಾಪಾರ ಬಿರುಸಿನಿಂದ ನಡೆಯಿತು.

## ‘ಫಿಯರ್‌ಲೆಸ್’ ವಿರುದ್ಧ ತನಿಖೆಗೆ ಆದೇಶ

ಈಚೆಗೆ ಕರ್ನಾಟಕದಾದ್ಯಂತ, ಅದರಲ್ಲೂ ಮಲೆನಾಡಿನ ಮೂಲೆ ಮೂಲೆಗಳಲ್ಲಿ ಬಹಳ ವ್ಯಾಪಕವಾಗಿ ‘ಇನ್ಶೂರೆನ್ಸ್’ನ ರೀತಿಯಲ್ಲೇ (ಅದರ ಹಲವು ಏಜೆಂಟರು ಕೆಲವು ಜನರ ಹತ್ತಿರ "ಇನ್ಶೂರೆನ್ಸ್ ಮಾಡಿಸುತ್ತೇವೆ" ಎಂದೇ ಹೇಳಿಕೊಂಡು) ‘ಪಾಲಿಸಿ’ಗಳನ್ನು ಮಾಡಿಸಿ, ಭಾರಿ ಪ್ರಮಾಣದಲ್ಲಿ ‘ಪ್ರೀಮಿಯಂ’ ಹಣ ಸಂಗ್ರಹಿಸುತ್ತಿರುವ ಸಂಸ್ಥೆ ಕಲ್ಕತ್ತದ ‘ಫಿಯರ್‌ಲೆಸ್ ಜನರಲ್ ಫೈನಾನ್ಸ್ ಅಂಡ್ ಇನ್ವೆಸ್ಟ್‌ಮೆಂಟ್ ಕಂಪೆನಿ’.

ಇದರ ವ್ಯವಹಾರಗಳ ಸಾಚಾತನದ ಬಗ್ಗೆ ಹಲವು ವಿವಾದಗಳು, ಹಲವು ತರದ ಆಳವಾದ ಸಂಶಯಗಳು ಪ್ರಚಲಿತವಾಗಿವೆ. ಇವೆಲ್ಲಕ್ಕೆ ಕಿರೀಟವಿಟ್ಟಂತೆ ಈಗ, ‘ಮೊನೋಪಲೀಸ್ ಅಂಡ್ ರಿಸ್ಟ್ರಿಕ್ಟಿವ್ ಟ್ರೇಡ್ ಪ್ರ್ಯಾಕ್ಟೀಸಸ್ ಕಮಿಶನ್’ ಎಂಬ, ಸರ್ಕಾರದ ಉನ್ನತ ಅಧಿಕಾರದ ಆಯೋಗವು ಈ ಸಂಸ್ಥೆಯ ವ್ಯವಹಾರಗಳ ಬಗ್ಗೆ ತನಿಖೆ ನಡೆಸುವಂತೆ ಭಾರತದ ಡೈರೆಕ್ಟರ್ ಜನರಲ್ ಆಫ್ ಇನ್ವೆಸ್ಟಿಗೇಶನ್ಸ್ ಇವರನ್ನು ಕೇಳಿದ್ದು, 4 ವಾರದೊಳಗೆ ಪ್ರಾಥಮಿಕ ವರದಿ ಸಲ್ಲಿಸಲು ಆದೇಶಿಸಿದೆ ಎಂದು ಮಾರ್ಚ್ 2ನೇ ತಾರೀಕಿನ ‘ಡೆಕ್ಕನ್ ಹೆರಾಲ್ಡ್’ ವರದಿ ಮಾಡಿದೆ.

‘ಫಿಯರ್‌ಲೆಸ್’ ಸಂಸ್ಥೆಯು ಪಾಲಿಸಿದಾರರ ಠೇವಣಿಗಳನ್ನು ನಷ್ಟಗೊಳಿಸುತ್ತಿದೆಯೆಂದೂ, ನಿಂತು ಹೋದ (ಲ್ಯಾಪ್ಸ್) ಸರ್ಟಿಫಿಕೇಟುಗಳ ಪುನರುಜ್ಜೀವನಕ್ಕೆ ಅಡೆತಡೆಯ ರೂಪದ ಹಲವು ಶರತ್ತುಗಳನ್ನು ಹೇರುತ್ತಿದೆಯೆಂದೂ, ಸತ್ಯಾಂಶಗಳನ್ನು ಬಚ್ಚಿಡುವ ತನ್ನ ಜಾಹೀರಾತುಗಳಿಂದ ಜನರನ್ನು ತಪ್ಪುದಾರಿಗೆ ಎಳೆಯುತ್ತಿದೆಯೆಂದೂ ಅಹಮದಾಬಾದಿನ ‘ಗ್ರಾಹಕರ ಶಿಕ್ಷಣ ಮತ್ತು ಸಂಶೋಧನಾ ಕೇಂದ್ರ’ ಎಂಬ ಸಾರ್ವಜನಿಕ ಹಿತಾಸಕ್ತಿಯ ಸಂಸ್ಥೆಯು ಸಲ್ಲಿಸಿದ ದೂರಿನ ಮೇರೆಗೆ ಈ ತನಿಖೆಗೆ ಆದೇಶಿಸಲಾಗಿದೆಯೆಂದು ಪತ್ರಿಕಾ ವರದಿ ತಿಳಿಸಿದೆ.

### ಗೋವಿಂದ ಗೌಡರಿಗೆ 'ಬ್ರಾಹ್ಮಣ ವಿರೋಧಿ' ಎಂಬ ಹಣೆ ಪಟ್ಟಿ ಅನುಚಿತ;

# ಅಸಮರ್ಪಕ ದರ್ಖಾಸ್ತು, ಪುಂಡಾಟಿಕೆ, ಭ್ರಷ್ಟತೆ, ಸುಲಿಗೆ - ಜನತಾದ್ದೂ ಕಳಂಕಗಳು

ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ರಾಜಕೀಯ ಕೌಶಲ ಮತ್ತು ವರ್ಚಸ್ಸು, ಅವರ ಸರ್ಕಾರ ರಾಜೀನಾಮೆ ಕೊಟ್ಟ ಬಗ್ಗೆ ಜನರಲ್ಲಿ ಹುಟ್ಟಿದ ಅನುಕಂಪ, ಪ್ರಜ್ಞಾವಂತ ಜನರಲ್ಲಿ ಕಾಂಗ್ರೆಸ್ ಗೆಲ್ಲಬಾರದೆಂಬ ಏಕೈಕ ಗುರಿ, ಜೊತೆಗೆ ಈ ಎರಡು ವರ್ಷಗಳಲ್ಲಿ ಜನತಾ ಸರ್ಕಾರದ ಅನೇಕ ಒಳ್ಳೆಯ ಕೆಲಸಗಳು – ಇವೆಲ್ಲವುಗಳಿಂದಾಗಿ ರಾಜ್ಯದಲ್ಲಿ ಸ್ಪಷ್ಟ ಬಹುಮತ ಪಡೆಯುತ್ತಿರುವ ಕಾಂಗ್ರೆಸ್-ಅಲ್ಲದ ಮೊಟ್ಟ ಮೊದಲ ಪಕ್ಷವಾಗಿ ಜನತಾ ಪಕ್ಷ ಮತ್ತೆ ಅಧಿಕಾರಕ್ಕೆ ಬಂದಿದೆ.

ಹಾಗೆಯೇ ನಮ್ಮ ಕ್ಷೇತ್ರದಲ್ಲೂ ಸಹ ಮಾಜಿ ಶಾಸಕ ಜನತಾದ ಹೆಚ್.ಜಿ. ಗೋವಿಂದ ಗೌಡ ಪುನಃ ಗೆದ್ದಿದ್ದಾರೆ. ಇವರ ಗೆಲುವಿಗೆ ಕೂಡ ಹೆಗಡೆ ಪ್ರಭಾವ, ಜನತಾ ಸರ್ಕಾರ ಒಳ್ಳೆಯ ಕೆಲಸ ಮಾಡಬಲ್ಲದೆಂಬ ವಿಶ್ವಾಸ ಮತ್ತು ನಿರೀಕ್ಷೆ–ಇವುಗಳ ಜೊತೆಗೆ ಗೋವಿಂದ ಗೌಡರು ಕ್ಷೇತ್ರಕ್ಕೆ ಮಾಡಿರುವ ಕೆಲಸಗಳ ಬಗೆಗಿನ ತೃಪ್ತಿ, ಮೆಚ್ಚುಗೆಗಳೂ ಸಹ ಕಾರಣವಾಗಿವೆಯೆಂದರೆ ಕೆಲವರು ಹುಬ್ಬೇರಿಸಬಹುದಾದರೂ ಈ ಮಾತು ನಿಜ. ಹೀಗೆಂದಾಕ್ಷಣ, ಕ್ಷೇತ್ರದಲ್ಲ ಎಲ್ಲಾ ಕೆಲಸ ಆಗಿ ಹೋಯಿತೆಂದಲ್ಲ. ಆದರಲ್ಲೂ ಹಲವು ಊರುಗಳಲ್ಲಿ ಬಹಳ ಕಡಿಮೆ ಕೆಲಸ ಆಗಿರಬಹುದು, ಕೆಲವೆಡೆ ಕೆಲಸ ಹಿಂದೆ ಬಿದ್ದಿರಬಹುದು. ಆದರೆ ಒಟ್ಟಿನಲ್ಲಿ ಕ್ಷೇತ್ರವನ್ನು ಪರಿಗಣಿಸಿದರೆ, ರಾಜ್ಯದಲ್ಲಿ ಹೇಗೆ ಇಷ್ಟು ವರ್ಷಗಳ ಸಾಧನೆಯೆದುರು ಈ 2 ವರ್ಷಗಳ ಸಾಧನೆ ಗಣನೀಯವೋ ಹಾಗೇ ಇಲ್ಲೂ ಆಗಿದೆ.

ಗೋವಿಂದ ಗೌಡರ ಬಗ್ಗೆ ಹಲವು ಆರೋಪಗಳನ್ನು ಮಾಡಲಾಗುತ್ತದೆ. ಆದರೆ ಅದರಲ್ಲಿ ಹೆಚ್ಚಿನವು ರಾಜಕೀಯದಲ್ಲಿ ಸಾಮಾನ್ಯವಾದಂಥವು. ಅಂದರೆ ಇವರೂ ರಾಜಕೀಯ ಪೈಪೋಟಿಯಲ್ಲಿ ಕೆಲವು ಸಲ ಬೇರೆಯವರಂಥದೇ ತಂತ್ರಗಳನ್ನು ಬಳಸುತ್ತಾರೆಂದಾಗುತ್ತದೆ. ತಮ್ಮ ವಿರೋಧ ಪಕ್ಷಗಳವರನ್ನು (ಬಿಜೆಪಿಯೂ ಸೇರಿ) ತೀವ್ರವಾಗಿ ಮತ್ತು ಕೆಲವೊಮ್ಮೆ ವೈಯಕ್ತಿಕ ಮಟ್ಟದಲ್ಲೂ ಸಹ ಹತ್ತಿಕ್ಕಲು ನೋಡುತ್ತಾರೆ ಎಂಬುದೊಂದು ಪ್ರಮುಖ ಆರೋಪ. ಈ ದಿಕ್ಕಿನಲ್ಲಿ ಗೌಡರು ಅಪವಾದಕ್ಕೆಡೆಯಿಲ್ಲದಂತೆ ವರ್ತಿಸಲು ಯತ್ನಿಸುವುದು ಮೇಲು.

ಇಲ್ಲಿ ಇನ್ನೊಂದು ಆರೋಪದ ಬಗ್ಗೆ ಚರ್ಚಿಸುವುದು ಅಗತ್ಯ. "ಗೋವಿಂದಗೌಡರು ಕಡು ಬ್ರಾಹ್ಮಣ ವಿರೋಧಿ" ಎಂಬ ದೊಡ್ಡದೊಂದು ಪ್ರಚಾರವನ್ನು ಎಬ್ಬಿಸಲಾಗಿದೆ. ಪತ್ರಿಕೆಗಳೂ ಸಹ ಈ ಆರೋಪವನ್ನು ಒಂದನ್ನು ನೋಡಿ ಇನ್ನೊಂದು ತಿರುಗಿಸಿ ತಿರುಗಿಸಿ ಜಗಿದಿವೆ. ಈ ಸಲ ಇದನ್ನೊಂದು ದೊಡ್ಡ ಅಸ್ತ್ರವಾಗಿಯೂ ಬಳಸಲಾಯಿತು.

ಗೌಡರು ಮೊದಲ ಸಲ ಚುನಾವಣೆಗೆ ನಿಂತಾಗಲೇ ಈ ಮಾತುಗಳನ್ನು ನಾನೂ ಕೇಳಿದ್ದೆ. ಆದರೆ ನಾನು ಕಂಡಂತೆ, ಇದೊಂದು ಬಹಳ ಸಂಕುಚಿತ ಬುದ್ಧಿಯ ತಪ್ಪು ಗ್ರಹಿಕೆ. ಈ ಭಾಗದಲ್ಲಿ, ಅಷ್ಟೇಕೆ, ನಮ್ಮ ಇಡೀ ಸಮಾಜದಲ್ಲಿ ಇಂದೂ ಸಹ ಪ್ರತಿಯೊಬ್ಬನಿಗೂ ತನ್ನ ಜಾತಿಯವರೆಂದ ಕೂಡಲೆ ಸ್ವಲ್ಪ ಹೆಚ್ಚು ಸಹಾನುಭೂತಿ ಹುಟ್ಟುತ್ತದೆ. ಕೆಲವರು ಇದನ್ನು ಸಾಧ್ಯವಾದಷ್ಟು ಹತೋಟಿಯಲ್ಲಿಡುತ್ತಾರೆ. ಮತ್ತೆ ಕೆಲವರು ಇದನ್ನೇ ಬಂಡವಾಳ ಮಾಡಿಕೊಳ್ಳುತ್ತಾರೆ. ಇದನ್ನು ಮೀರಿ ವ್ಯವಹರಿಸಬೇಕಾದರೆ ಅಂಥ ಗಟ್ಟಿ ಮಾನವತಾವಾದಿಯೇ ಆಗಿರಬೇಕು.

ಗೋವಿಂದ ಗೌಡರೂ ಸಹ ಈ ಮಿತಿ (ಮಾರ್ಜಿನ್)ಗಿಂತ ಅತಿಯಾದ್ದೇನೋ ಮಾಡುತ್ತಾರೆಂದು ನನಗನ್ನಿಸುವುದಿಲ್ಲ. ಕಾಂಗ್ರೆಸ್ ಮತ್ತು ಬಿಜೆಪಿಯೊಳಗೆ ಹಂಚಿಕೊಂಡು ಜನತಾದೊಳಗೆ ಉಳಿದಿರುವ ಕೇವಲ ಬೆರಳೆಣಿಕೆಯಷ್ಟು ಜನ ಬ್ರಾಹ್ಮಣ ಮುಂದಾಳುಗಳ ಮತ್ತು ಕಾರ್ಯಕರ್ತರ ವಿಷಯದಲ್ಲಿ ಅವರು ಅಂಥಾದ್ದೊಂದು ತಾರತಮ್ಯ ಮಾಡಿದ್ದು ಕಾಣುವುದಿಲ್ಲ. ವಿವಿಧ ಸಮಿತಿಗಳಲ್ಲಿ, ಸ್ಥಾನಗಳಲ್ಲಿ ಹೆಚ್ಚು ಜನ ಒಕ್ಕಲಿಗರೇ ಕಾಣುತ್ತಾರೆಂದರೆ ಅದಕ್ಕೆ ಕಾರಣ ಜನತಾ ಪಕ್ಷದ ಸಂಘಟನೆಯಲ್ಲಿ ಅವರೇ ಹೆಚ್ಚಾಗಿರುವುದು ಮತ್ತು ಬ್ರಾಹ್ಮಣ ಮುಖಂಡರು ಕಮ್ಮಿಯಿರುವುದು ಹೊರತು ಗೋವಿಂದ ಗೌಡರ 'ಬ್ರಾಹ್ಮಣ ದ್ವೇಷ'ದಿಂದಲ್ಲ.

ಅಲ್ಲದೆ ಯಾರೇ ಅವರ ಬಳಿ ತಮ್ಮ ಅಥವಾ ತಮ್ಮ ಊರಿನ ಸಮಸ್ಯೆ ತೆಗೆದುಕೊಂಡು ಹೋದರೂ ಸಾವಧಾನವಾಗಿ ಕೇಳಿ ಮಾರ್ಗೋಪಾಯ ಸೂಚಿಸುತ್ತಾರೆ. ಯಾರಾದರೂ ಒಂದು ಪರಿಚಯಪತ್ರವೋ ಅಥವ ಶಿಫಾರ್ಸು ಪತ್ರವೋ ಬೇಕೆಂದು ಕೇಳಿದರೆ, ಅವರ ಅಗತ್ಯವೇನೆಂದು ತಿಳಿದು ಅದಕ್ಕೆ ತಕ್ಕಂತೆ ಪತ್ರ ಬರೆದು ಕೊಡುತ್ತಾರೆ. ಯಾರ ಬಗೆಗೂ ಯಾವುದೇ ಭೇದ ಭಾವ ತೋರಿಸುವುದು ನಾನು ಕಂಡಿಲ್ಲ.

ಇಷ್ಟೆಲ್ಲ ಪ್ರಚಾರದ ನಡುವೆಯೂ ಈ ಸಲ ಬಹಳ ಜನ ಬ್ರಾಹ್ಮಣರು ಜನತಾಕ್ಕೆ ಓಟು ನೀಡಿದ್ದಾರೆ. ಇದಕ್ಕೆ ರಾಮಕೃಷ್ಣ ಹೆಗ್ಡೆ ಮಾತ್ರವೇ ಕಾರಣವಲ್ಲ, ಗೋವಿಂದ ಗೌಡರ ಕಾರ್ಯಕ್ಷಮತೆಯನ್ನು ಜನ ಗುರುತಿಸಿರುವುದೂ ಕಾರಣ. ಏನೇ ಆಗಲಿ, ಈ ಪ್ರಚಾರಕ್ಕೆ ಜನ ಅಷ್ಟಾಗಿ ಸೊಪ್ಪು ಹಾಕಲಿಲ್ಲವೆಂಬುದೊಂದು ಸಮಾಧಾನದ ಸಂಗತಿ. ಆದಾಗ್ಯೂ ಗೌಡರು ಇಂಥ ಆಪಾದನೆಗಳನ್ನೂ ಗಮನದಲ್ಲಿಟ್ಟುಕೊಳ್ಳುವುದು ಒಳ್ಳೆಯದು.

ಇದಕ್ಕಿಂತ ಹೆಚ್ಚು ತುರ್ತಾಗಿ ಗೋವಿಂದ ಗೌಡರು ಗಮನಿಸಬೇಕಾದ ಒಂದೆರಡು ಸಂಗತಿಗಳಿವೆ. ಅದರಲ್ಲಿ ಬಹಳ ಮುಖ್ಯವಾದದ್ದು ದರ್ಖಾಸ್ತು. ಹಳ್ಳಿಗಳ ಬಡವರು, ಭೂ ರಹಿತರು ಹತ್ತಾರು ವರ್ಷಗಳಿಂದಲೂ ಭೂಮಿ ಕೇಳುತ್ತಿದ್ದರೂ ಕೊಡದೆ, ಅದೇ ಜಾಗವನ್ನು ಪೇಟೆಯ ದೊಡ್ಡ ದೊಡ್ಡ ವ್ಯಾಪಾರಿಗಳು, ಕಂಟ್ರಾಕ್ಟರು, ಲಾಯರುಗಳು, ದಲ್ಲಾಳಿಗಳು, ದರ್ಖಾಸ್ತು ಸಮಿತಿಯ ಯಾರಿಗೋ ಬೇಕಾದವರು ಮುಂತಾಗಿ ಬೇರೆ ಜೀವನೋಪಾಯ ಧಂಡಿಯಾಗಿರುವವರಿಗೇ ಮಂಜೂರು ಮಾಡಿದ ಪ್ರಕರಣಗಳನ್ನು ಎಷ್ಟು ಬೇಕಾದರೂ ತೋರಿಸಬಹುದು. ಹರಿಜನ-ಗಿರಿಜನರಿಗೆ ಮೀಸಲಾತಿ ಇರುವುದರಿಂದ ಒಂದಿಷ್ಟು ಭೂಮಿ ಮಂಜೂರು ಮಾಡಲಾಗಿದೆ. (ಅದೂ ಎಂಥದೆಂಬುದನ್ನು ಇನ್ನೂ ಕಾದು ನೋಡಬೇಕು.) ಮಿಕ್ಕಂತೆ ಎಲ್ಲಾ ಕಡೆ ಬಡವರಿಗೆ ಬಹಳ ಅನ್ಯಾಯವಾಗಿದೆ.

ದೇಶದ ಯಾವನೇ ಪ್ರಜೆ ಎಲ್ಲಿ ಬೇಕಾದರೂ ಆಸ್ತಿ ಹೊಂದಲು ಕಾನೂನು ಅವಕಾಶ ನೀಡಿರಬಹುದು. ಆದರೆ ಹಳ್ಳಿಗಳಲ್ಲಿ ಮಾತ್ರ ಮೊದಲು ಅಲ್ಲಿನ ಹಾಗೂ ಸುತ್ತಮುತ್ತಲಿನ ಬಡಬಗ್ಗರಿಗೆ, ರೈತಾಪಿ ಜನರಿಗೇ ಭೂಮಿ ಹಂಚಬೇಕು.

ಎರಡನೆಯದು ಜನತಾ ಪಕ್ಷದ ಕಾರ್ಯಕರ್ತರದೇ ದೊಂಬಿ, ದೌರ್ಜನ್ಯ, ಭ್ರಷ್ಟತೆ ಮತ್ತು ಅತಿರೇಕಗಳು. ಈಗಾಗಲೇ ಇದರಿಂದ ಗೋವಿಂದ ಗೌಡರಿಗೂ ಜನತಾ ಪಕ್ಷಕ್ಕೂ ಬಹಳ ನಷ್ಟವಾಗಿದೆ. ಗೌಡರ ಬಗ್ಗೆ ಹಲವಾರು ಕಡೆ ಸಾಮಾನ್ಯ ಜನರ ವಿರೋಧವಿದ್ದರೆ ಅದು ಇಂಥ ಕಾರ್ಯಕರ್ತರಿಂದಾಗಿಯೇ ಹೊರತು ಗೌಡರ ಸ್ವಂತದಿಂದಲ್ಲ.

ಈಗಾಗಲೇ ರಾಜ್ಯದ ಹಲವೆಡೆ–ಅಷ್ಟೇಕೆ ನಮ್ಮ ಕ್ಷೇತ್ರದಲ್ಲು ಅಲ್ಲಲ್ಲಿ, ಕಾಂಗ್ರೆಸ್‌ಗೆ ಮತ ಕೊಟ್ಟವರ ಮೇಲೆ ಇಂಥ ಕೆಲವರು 'ಕ್ರಮ' ಕೈಗೊಂಡ ವರದಿಗಳಿವೆ. ಗೌಡರು ತಮ್ಮ ಸುತ್ತ ಸುತ್ತುವ ಇಂಥ ಹಲವು ಕ್ಷುದ್ರಗ್ರಹಗಳನ್ನು ನಿರ್ದಾಕ್ಷಿಣ್ಯವಾಗಿ ದೂರ ಮಾಡುವುದಲ್ಲದೆ, ಅವರು ಎಲ್ಲೂ ಬಾಲ ಬಿಚ್ಚದಂತೆ ಬಂದೋಬಸ್ತು ಮಾಡಬೇಕು. ಯಾರು ಜನರ ಹಿತದ ಬಗ್ಗೆ ನಿಷ್ಠೆಯುಳ್ಳವರೆಂದು ತಿಳಿಯುವುದು ಕಷ್ಟವಲ್ಲ. ಅಂಥ ಕೇವಲ ನಾಲ್ಕಾರು ಕಾರ್ಯಕರ್ತರಿದ್ದರೂ ಇಂಥ ಹತ್ತಾರು ಹಿಂಬಾಲಕರಿಗಿಂತ ಹೆಚ್ಚು ಒಳ್ಳೆಯ ಕೆಲಸ ಮಾಡಬಹುದು.

(ಗೆದ್ದ ಪಕ್ಷದವರಾಗಿ ಜನತಾ ಕಾರ್ಯಕರ್ತರು ಈಗ ಎಷ್ಟು ಸಂಯಮದಿಂದ ವರ್ತಿಸಿದರೆ ಜನರಿಗೆ ಅಷ್ಟು ಕ್ಷೇಮ; ಪಕ್ಷದ ಮರ್ಯಾದೆಯೂ ಅಷ್ಟು ಹೆಚ್ಚುತ್ತೆ. ಗೆದ್ದ ಹುಮ್ಮಸ್ಸಿನಲ್ಲಿ, ಅದರಲ್ಲೂ ಆಡಳಿತ ಪಕ್ಷದವರನ್ನು ಸಾಮಾನ್ಯವಾಗಿ ಪೋಲೀಸ್ ಇತ್ಯಾದಿಗಳು ಸುಲಭವಾಗಿ ಮುಟ್ಟುವುದಿಲ್ಲ ಎಂಬ ಪರಿಸ್ಥಿತಿಯಿರುವಾಗ ಹಳೆಯ ಹಗೆ, ಸೇಡುಗಳು ಮರುಕಳಿಸಿ ಗಲಾಟೆಗಳಾಗುವ ಸಾಧ್ಯತೆ ಬಹಳ ಜಾಸ್ತಿ.)

ಇನ್ನೊಂದು ಬಗೆಯ ಕಾರ್ಯಕರ್ತರಿದ್ದಾರೆ. ತಮ್ಮ ಜೀವನಕ್ಕಾಗಿ ಯಾವುದೇ ರೀತಿ ದುಡಿಮೆ ಮಾಡದೆ ರಾಜಕೀಯದ ಲಾಭದಿಂದಲೇ ಜೀವನ ಹೊರೆಯುವವರು. ಇಂಥವರಿಗೆ ಅಧಿಕಾರ, ಸ್ಥಾನಮಾನ ಸಿಕ್ಕರೆ ಖಂಡಿತ ಜನರನ್ನು ಸುಲಿಯುತ್ತಾರೆ, ಗಲಾಟೆ-ಧಾಂಧಲೆ ನಡೆಸುತ್ತಾರೆ. ಇವರಿಗೆ ಯಾವುದೇ ಸ್ಥಾನ-ಮಾನ, ಸಮಿತಿ ಸದಸ್ಯತ್ವ ಇತ್ಯಾದಿ ಏನೂ ಕೊಡಲೇಬಾರದು

ಈ ಕೆಲವು ಎಚ್ಚರಿಕೆಗಳನ್ನು ಅನುಸರಿಸಲು ಶಾಸಕರು ಎಂದು ಸೋಲುತ್ತಾರೋ ಅಂದೇ ಅವರು ಪೂರ್ಣ ಸೋತಂತೆ.

‡ ‡ ‡

ಕ್ಷೇತ್ರದಲ್ಲಿ ಎಷ್ಟು ಮಾಡಿದರೂ ಮುಗಿಯದಷ್ಟು ಕೆಲಸಗಳಿವೆ. ಇವನ್ನು ಹೆಚ್ಚೆಚ್ಚು ಪೂರೈಸುವಲ್ಲಿ ಗೋವಿಂದ ಗೌಡರು ಮತ್ತು ಅವರ ಸರ್ಕಾರ ಯಶಸ್ವಿಯಾಗಲಿ ಎಂದು 'ಮುಂಜಾವು' ಹಾರೈಕೆ.

—ಸಿರಿಮನೆ ನಾಗರಾಜ್.

# ಐದು ವರ್ಷಗಳ ಅನುಭವದ ನಂತರವೂ ಅನರ್ಹರೆ?

ಪ್ರಾಥಮಿಕ ಶಾಲೆಗಳಲ್ಲಿ 'ಸ್ಥಳೀಯ ಶಿಕ್ಷಕ'ರೆಂಬ ಹಣೆ ಪಟ್ಟಿಯೊಡನೆ 1980ರಿಂದ ಕೆಲಸ ನಿರ್ವಹಿಸಿಕೊಂಡು ಬಂದ ನೂರಾರು ಜನ ಶಿಕ್ಷಕರು ಸರ್ಕಾರದ, ಶಿಕ್ಷಣ ಇಲಾಖೆಯ ಅರ್ಥವಾಗದ ನೀತಿಯಿಂದಾಗಿ ಈಗ ಅತಂತ್ರರಾಗಿದ್ದಾರೆ. ಅವರ ಮನವಿಗಳು, ಸರ್ಕಾರದೊಂದಿಗಿನ ಚರ್ಚೆಗಳು ಎಲ್ಲ ವಿಫಲವಾಗಿ ಅವರೀಗ ಚಳುವಳಿಯ ಹಾದಿಗೆ ತಳ್ಳಲ್ಪಟ್ಟಿದ್ದಾರೆ. ನಮ್ಮ ಜಿಲ್ಲೆಯೊಂದರಲ್ಲೇ ಇಂಥ ಸುಮಾರು 130 ಜನ ಶಿಕ್ಷಕರಿದ್ದಾರೆ.

### ಕ್ರಮಬದ್ಧ ನೇಮಕ

1980ರಲ್ಲಿ (ದೇವರಾಜ ಅರಸು ಸರ್ಕಾರವಿದ್ದಾಗ) ಇವರನ್ನು ಸಂದರ್ಶನ ನಡೆಸಿ ರೋಸ್ಟರ್ ಕ್ರಮದಲ್ಲೇ ಆಯ್ಕೆ ಮಾಡಲಾಗಿತ್ತು. ಅಲ್ಲಿಂದ ನಿಗದಿ ಮೊತ್ತದ (ಕನ್ಸಾಲಿಡೇಟೆಡ್) ಸಂಬಳದಲ್ಲಿ ಕೆಲಸ ಮಾಡುತ್ತ ಬಂದರು. ರಜೆ ಮತ್ತು ಸೇವಾ ನಿಯಮಗಳು ಇತರ ಸರ್ಕಾರಿ ನೌಕರರಂತೆಯೇ ಇವರಿಗೂ ಅನ್ವಯಿಸಿದರೂ ಪ್ರಾವಿಡೆಂಟ್ ಫಂಡ್, ಸರ್ಕಾರಿ ವಿಮೆ ಮುಂತಾದ ಯಾವ ಸೌಲಭ್ಯವೂ ಇವರಿಗಿಲ್ಲ.

### "ನೆಪಮಾತ್ರ ಸಂದರ್ಶನಕ್ಕೆ ಬನ್ನಿ"

ಈ ಬಾರಿ ಶಿಕ್ಷಕರ ಖಾಯಂ ನೇಮಕದ ವೇಳೆಗೆ ಸ್ಥಳೀಯ ಶಿಕ್ಷಕರೂ ಸಂದರ್ಶನಕ್ಕೆ ಹಾಜರಾಗಬೇಕೆಂದು ಆದೇಶ ಬಂದಾಗ ಇವರುಗಳು ವಿದ್ಯಾ ಮಂತ್ರಿಗಳನ್ನು ಕಂಡರು. ರಾಚಯ್ಯನಿಂದ ರಘುಪತಿಯಾಗಿ ಸೋಮಶೇಖರ್‌ವರೆಗೆ ಬಂದ ವಿದ್ಯಾ ಮಂತ್ರಿಗಳೆಲ್ಲ "ನೆಪ ಮಾತ್ರಕ್ಕೆ ಸಂದರ್ಶನಕ್ಕೆ ಹಾಜರಾಗಿ. ಯಾರನ್ನೂ ಕೈ ಬಿಡುವುದಿಲ್ಲ" ಎಂದು ಭರವಸೆ ಕೊಟ್ಟರು. ಮುಖ್ಯ ಮಂತ್ರಿಗಳಂತೂ. "ಸಂದರ್ಶನವಾಗಿ ರೋಸ್ಟರ್ ಕ್ರಮದಲ್ಲೇ ಆಯ್ಕೆ ಆಗಿರುವುದರಿಂದ ಪುನಃ ಸಂದರ್ಶನ ಕೂಡ ಬೇಕಿಲ್ಲ. ಹಾಗೇ ಖಾಯಂ ಮಾಡಬಹುದು" ಎಂದರು. ಆದರೆ ಆ ಮಾತು ಆದೇಶದ ರೂಪ ಮಾತ್ರ ಪಡೆಯಲಿಲ್ಲ.

ಇವರೆಲ್ಲ ಸಂದರ್ಶನಕ್ಕೆ ಹಾಜರಾದರು.

(3ನೇ ಪುಟಕ್ಕೆ)

### ಬಿಳಾಲುಕೊಪ್ಪ ಕೃಷಿ ವಿಚಾರ ವಿನಿಮಯ ಕೇಂದ್ರದಲ್ಲಿ

# ಮಣ್ಣು ಪರೀಕ್ಷೆ ಕಾರ್ಯಕ್ರಮ

ಬಿಳಾಲುಕೊಪ್ಪ: ಇಲ್ಲಿನ ಕೃಷಿ ವಿಚಾರ ವಿನಿಮಯ ಕೇಂದ್ರದ ಆಶ್ರಯದಲ್ಲಿ ಫೆ. 20 ರಂದು ಬಾಳೆಹೊನ್ನೂರಿನ ಕಾಫಿ ಸಂಶೋಧನಾ ಕೇಂದ್ರದ ಸಂಚಾರಿ ಮಣ್ಣು ಪರೀಕ್ಷಾ ಘಟಕದಿಂದ ಮಣ್ಣು ಪರೀಕ್ಷೆ ಮತ್ತು ಸಲಹೆಯ ಕಾರ್ಯಕ್ರಮ ನಡೆಯಿತು.

ರೈತರು ತಂದಿದ್ದ ಸುಮಾರು 120 ಮಣ್ಣಿನ ಮಾದರಿಗಳನ್ನು ಪರೀಕ್ಷಿಸಿ ಅವುಗಳಲ್ಲಿ 60ಕ್ಕೆ ಸ್ಥಳದಲ್ಲೇ ಫಲಿತಾಂಶ ನೀಡಿ, ಉಪಯೋಗಿಸಬಹುದಾದ ರಸಗೊಬ್ಬರ ಮತ್ತು ಸುಣ್ಣದ ಪ್ರಮಾಣ ತಿಳಿಸಲಾಯಿತು.

ಕಾಫಿ ಸಂಶೋಧನಾ ಕೇಂದ್ರದ ತಜ್ಞರಾದ ಕೃಷ್ಣಪ್ಪ ನಾಯಕ್, ಜಮ್ಷೆಡ್ ಅಹಮದ್ ಮತ್ತು ವೆಂಕಟೇಶಲು ಅವರುಗಳು ಮಣ್ಣು ಮತ್ತು ರಸಗೊಬ್ಬರ, ಕಾಫಿ ತಳಿಗಳು ಹಾಗೂ ಕೀಟಗಳು-ಕೀಟನಾಶಕಗಳು -ಈ ವಿಷಯಗಳನ್ನು ಕುರಿತು ತಜ್ಞ ಉಪನ್ಯಾಸ ನೀಡಿದರು. ಕಾಫಿ ಬೆಳೆಗೆ ಕಾಫಿ ಮಂಡಳಿಯಿಂದ ದೊರೆಯುವ ಸೌಲಭ್ಯಗಳನ್ನು ಮಂಡಳಿಯ ಕೊಪ್ಪ ಕಿರಿಯ ಸಂಪರ್ಕಾಧಿಕಾರಿ ತಿಮ್ಮಾರೆಡ್ಡಿ ವಿವರಿಸಿದರು.

**ಅಭಿನಂದನೆ**

ಇದೇ ಸಂದರ್ಭದಲ್ಲಿ, 1984ನೇ ಸಾಲಿಗೆ ಈ ಕೇಂದ್ರ ಶಿವಮೊಗ್ಗ ವಿಭಾಗದಲ್ಲಿ 'ಅತ್ಯುತ್ತಮ ಕೃಷಿ ವಿಚಾರ ವಿನಿಮಯ ಕೇಂದ್ರ' ಎಂಬ ಪ್ರಶಸ್ತಿ ಪಡೆದ ಬಗ್ಗೆ ಕೇಂದ್ರದ ಅಧ್ಯಕ್ಷ ಕೆ. ವಿ. ಉಡುಪ, ಕಾರ್ಯದರ್ಶಿ ಬಿ.ವಿ. ಶ್ರೀಧರ ರಾವ್ ಮತ್ತು ಖಜಾಂಚಿ ಬಿ. ಕೆ. ದೇವಪ್ಪಯ್ಯ ಅವರುಗಳನ್ನು ಸನ್ಮಾನಿಸಲಾಯಿತು. ಬಸರಿಕಟ್ಟೆ ಸಿಂಡಿಕೇಟ್ ಬ್ಯಾಂಕಿನ ಮ್ಯಾನೇಜರ್ ಎಂ. ಧನಂಜಯ, ಗ್ರಾ ಅ. ಅಧಿಕಾರಿ ಕೆ. ಜಗದೀಶ್ ಮಾತಾಡಿದರು.

ಬಿ.ವಿ ಶ್ರೀಧರ ರಾವ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದು, ಕಾರ್ಯದರ್ಶಿ ಎಲ್.ಎಲ್. ನಾಗಭೂಷಣ್ ಸ್ವಾಗತಿಸಿ ಬಿ. ಎಲ್. ವಾಸುದೇವ ಮೂರ್ತಿ ವಂದಿಸಿದರು. ಸುತ್ತಮುತ್ತಿನ 120ಕ್ಕೂ ಹೆಚ್ಚು ರೈತರು ಕಾರ್ಯಕ್ರಮದ ಪ್ರಯೋಜನ ಪಡೆದರು.

### ಮೇಗುಂದ ಹೋಬಳಿ ಎಂಬ

# ಕಾಂಗ್ರೆ ಭದ್ರ ಕೋಟೆ ಜನತಾದಿಂದ ಭಗ್ನ

ಒಂದು ಕಾಲದಲ್ಲಿ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರ, ಹಾಗೆಯೇ ಶೃಂಗೇರಿ ವಿಧಾನ ಸಭಾ ಕ್ಷೇತ್ರ ಇವೆಲ್ಲ ಕಾಂಗ್ರೆಸ ಗಟ್ಟಿ ನೆಲೆಗಳಾಗಿದ್ದಂತೆ, ಶೃಂಗೇರಿ ಕ್ಷೇತ್ರದಲ್ಲಿ, ಬಹುಪಾಲು ಕಾಫಿ ತೋಟಗಳಿಂದ ತುಂಬಿರುವ ಮೇಗುಂದ(ಜಯಪುರ) ಹೋಬಳಿ ಕೂಡ ಯಾರೂ ಅಲುಗಿಸಲಾರದಂಥ ಕಾಂಗ್ರೆ ಭದ್ರಕೋಟೆಯಾಗಿತ್ತು. 1983ರ ವಿಧಾನ ಸಭಾ ಚುನಾವಣೆಯಲ್ಲಿ ಎಲ್ಲ ಕಡೆ ಕಾಂಗ್ರೆ ವಿರೋಧಿ ಅಲೆಯಿದ್ದು ಜನತಾ ಗೆದ್ದಾಗಲೂ ಸಹ ಈ ಹೋಬಳಿಯಲ್ಲಿ ಜನತಾ ಅಭ್ಯರ್ಥಿ ಗಳಿಸಿದ ಮತಗಳು ಬಹು ಕಮ್ಮಿ.

ಎರಡೇ ತಿಂಗಳ ಹಿಂದೆ ಕಾಂಗ್ರೆಯನ್ನು ಪ್ರಚಂಡವಾಗಿ ಗೆಲ್ಲಿಸಿದ್ದ ಚಿಕ್ಕಮಗಳೂರು ಕ್ಷೇತ್ರ ಈ ಸಲ ತನ್ನ ಏಳೂ ಘಟಕಗಳಲ್ಲಿ ಕಾಂಗ್ರೆ ಗಂಟು ಮುಳುಗಿಸಿದೆ. ಹಾಗೆಯೇ ಕಾಂಗ್ರೆಸ ಈ ಮೇಗುಂದಾ ಕೋಟೆಯನ್ನು ಜನತಾ ಪಕ್ಷ ಯಶಸ್ವಿಯಾಗಿ ಭೇದಿಸಿ ಕಾಂಗ್ರೆಯ ಸಮಸಮಕ್ಕೆ ಬಂದಿದೆ, ಕಾಂಗ್ರೆಸ 8ಕ್ಕೆ ತಾನು 7 ಓಟಿನಂತೆ (ಸುಮಾರು 4000:3500) ಪಡೆದಿದೆ. ವಾಸ್ತವವಾಗಿ ಇಷ್ಟು ಕಳೆದ ಸಲದ ಪ್ರಮಾಣದಲ್ಲೇ ಮತ ಹಂಚಿಕೆಯಾಗಿದ್ದರೆ, ಗೋವಿಂದ ಗೌಡರು ಗೆಲ್ಲುವುದು ಕನಸಿನಲ್ಲೂ ಸಾಧ್ಯವಿರಲಿಲ್ಲ.

ಮತಗಳ ಎಣಿಕೆಯ ವೇಳೆ, 135ನೇ ಸಂಖ್ಯೆಯ ಮತಗಟ್ಟೆವರೆಗೆ (ಹುಲಿಗರಡಿ) ಜನತಾದ ಮುನ್ನಡೆ 1500ಕ್ಕೂ ಮಿಕ್ಕಿ ಇತ್ತು. ನಂತರ, ಮೇಗುಂದ ಹೋಬಳಿಯ ಕೆಲವು (ನಮ್ಮ 10-3-'85ರ ಸಂಚಿಕೆಯಲ್ಲಿನ ಪಟ್ಟಿ ಗಮನಿಸಿ) ಹಾಗೂ ನ.ರಾ. ಪುರ ತಾಲ್ಲೂಕಿನ ಕೆಲವು ಮತ ಪೆಟ್ಟಿಗೆಗಳ ಎಣಿಕೆ ನಡೆದಾಗ ಮುನ್ನಡೆ ಏಕಾಏಕಿ ಕುಸಿದು 83ಕ್ಕೆ ನಿಂತಿತು.

ಒಟ್ಟಿನಲ್ಲಿ ಈ ಕಾಂಗ್ರೆ ಕೋಟೆ ಈ ಸಲ ಜನತಾದ ಜಯಕ್ಕೇ ಕೈಗೂಡಿಸಿತು.

# ತಾರಾದೇವಿ ರಾಜೀನಾಮೆಗೆ ಕಾಂಗ್ರೆಯೊಳಗೇ ಒತ್ತಾಯ!

ಬೆಳ್ತಂಗಡಿ ಸೇರಿದಂತೆ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದ ಏಳೂ ಘಟಕಗಳಲ್ಲಿ ಕಾಂಗ್ರೆ ಸೋಲುಂಡಿದೆ. ಇದರಿಂದಾಗಿ ಈ ಕ್ಷೇತ್ರದ ಲೋಕಸಭಾ ಸದಸ್ಯೆ ಡಿ.ಕೆ.ತಾರಾದೇವಿ ರಾಜೀನಾಮೆ ಕೊಡಬೇಕೆಂಬ ಒತ್ತಾಯ ಈಗ ಜನತಾ ಮಾತ್ರವಲ್ಲ, ಕಾಂಗ್ರೆಯೊಳಗಿಂದಲೂ ಹೊರಟಿದೆ.

ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆ ಬಹುಮತ ಪಡೆದಾಗ ಜನತಾ ಸರ್ಕಾರ ರಾಜೀನಾಮೆ ಕೊಡಬೇಕೆಂದು ರಾಜ್ಯ ಕಾಂಗ್ರೆ ನಾಯಕರು ಕೇಳಿದಂತೆ ಈಗ ತಮ್ಮ ಪಕ್ಷ ಕಾಂಗ್ರೆ ಎಂಪಿಗಳ ರಾಜೀನಾಮೆಗೆ ಒತ್ತಾಯಿಸುವುದಿಲ್ಲನೆಂದು ರಾಮಕೃಷ್ಣ ಹೆಗಡೆ ಹೇಳಿದ್ದರೂ ಜನತಾ ಕಾರ್ಯಕರ್ತರು ತಾರಾದೇವಿ ರಾಜೀನಾಮೆಗೆ ಕರೆ ಕೊಡುತ್ತಿದ್ದಾರೆ.

"ಮೌಲ್ಯ ರಾಜಕಾರಣದ ಬಗ್ಗೆ ಮಾತಾಡುತ್ತಿದ್ದ ತಾರಾದೇವಿಯವರು ಈಗ ತಮ್ಮ ರಾಜಕಾರಣಕ್ಕೆ ಏನಾದರೂ ಮೌಲ್ಯವಿದ್ದರೆ ತಾವಾಗಿಯೆ ರಾಜೀನಾಮೆ ಕೊಡಬೇಕು" ಎಂದು ಶೃಂಗೇರಿ ತಾ|| ಜನತಾ ಕಾರ್ಯದರ್ಶಿ ಕಚ್ಚೋಡಿ ಶ್ರೀನಿವಾಸ್ ಒತ್ತಾಯಿಸಿದ್ದರೆ, 'ಶೃಂಗೇರಿ ಕ್ಷೇತ್ರದ ಕಾರ್ಯಕರ್ತರ' ಧ್ವನಿಯನ್ನು ಕೋಣೆಗದ್ದೆ ಪದ್ಮನಾಭ ಪ್ರತಿಧ್ವನಿಸಿದ್ದಾರೆ.

ಕಾಂಗ್ರೆಸ 'ಬಾಳೆಹೊನ್ನೂರು ಬ್ರಹ್ಮಚಾರಿಗಳು' ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ರಾಜ್ಯದಲ್ಲಿ ಅಭ್ಯರ್ಥಿಗಳ ಆಮನ್ಪರ್ಕ ಆಯ್ಕೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಕ್ಕಾಗಿ, ಪಕ್ಷದ ಒಬ್ಬ ಪ್ರಧಾನ ಕಾರ್ಯದರ್ಶಿಯೂ ಆಗಿರುವ ತಾರಾದೇವಿ ರಾಜಕೀಯ ಬಿಟ್ಟು "ತಾಳಿಯ ಭಾಗ್ಯ ಸ್ವೀಕರಿಸಲಿ" ಎಂದು ಒತ್ತಾಯಿಸಿದ್ದಾರಂತೆ!

ಬೆಂಗಳೂರಲ್ಲಿ ಪ್ರದೇಶ ಕಾಂಗ್ರೆ ಕಚೇರಿ ಎದುರು ಉದ್ರಿಕ್ತ ಕಾರ್ಯಕರ್ತರು ಪಕ್ಷದ ರಾಜ್ಯ ವರಿಷ್ಠರ ವಿರುದ್ಧ ದೊಡ್ಡ ಚಳುವಳಿಯನ್ನೇ ನಡೆಸಿರುವುದಾಗಿ ವರದಿಯಾಗಿದೆ.

### ಸಗಣಿ ಅನಿಲ ಘಟಕಕ್ಕೆ

# ಅಗ್ಗದಲ್ಲಿ ಸಿಮೆಂಟ್ ಪೂರೈಕೆಯ ಭರವಸೆ

ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಚೇರಿ ಮೂಲಕ ಸಿಮೆಂಟ್ ಪಡೆದಾಗ ಸಾಗಣೆ ವೆಚ್ಚ, ಸೆಂಟೇಜ್ ದರ ಇತ್ಯಾದಿ ತಗಲುವುದರಿಂದ ರೈತರಿಗೆ ದುಬಾರಿಯಾಗುತ್ತಿದ್ದು, ಸಗಣಿ ಅನಿಲ ಘಟಕ ಕಟ್ಟಿಸುವವರಿಗೆ ಈ ಮೇಲ್ ಖರ್ಚುಗಳಿಲ್ಲದೆ ಸಿಮೆಂಟ್ ಒದಗಿಸಬೇಕೆಂದು ಇಂಥ ಘಟಕ ಕಟ್ಟಿಸುತ್ತಿರುವ ಕೊಪ್ಪ ತಾಲ್ಲೂಕಿನ ರೈತರು ಚಿಕ್ಕಮಗಳೂರಿನ ವಿಶೇಷ ಜಿಲ್ಲಾಧಿಕಾರಿಗಳನ್ನು ಕೋರಿದ್ದರು.

ಇದಕ್ಕೆ ಉತ್ತರಿಸಿರುವ ವಿ. ಜಿ. ಗಳು, ಈ ಉದ್ದೇಶಕ್ಕಾಗಿ ಸಿಮೆಂಟ್ ಪೂರೈಸಲು

(4ನೇ ಪುಟಕ್ಕೆ)

ನಮ್ಮ ಕಳೆದ ಸಂಚಿಕೆಯಲ್ಲಿ ಪ್ರಕಟಿಸಿದ್ದ ಮತಗಟ್ಟೆವಾರು ಎಣಿಕೆವಿವರದಲ್ಲಿ ಮುದ್ರಣ ದೋಷದಿಂದ ಕೆಲವು ತಪ್ಪುಗಳಾಗಿದ್ದುದನ್ನು ಸರಿಪಡಿಸಿ ಇಲ್ಲಿ ಪ್ರಕಟಿಸಿದೆ. ಓದುಗರಿಗಾದ ತೊಂದರೆಗಾಗಿ ವಿಷಾದಿಸುತ್ತೇವೆ. —ಸಂ.

| ಮತಗಟ್ಟೆ | ಜನತಾ | ಕಾಂಗ್ರೆ | ಬಿಜೆಪಿ |
|---|---|---|---|
| ಕೆ. ಕಣಬೂರು | 311 | 253 | 5 |
| ಮಿಗ | 122 | 55 | 107 |
| ನಲ್ಲೂರು | 111 | 124 | 175 |
| ನ. ರಾ. ಪುರ (2) | 276 | 145 | 6 |
| ಕುದುರೆಗುಂಡಿ | 245 | 426 | 12 |
| ಹೆರಂದೂರು ಕೆಳಪೇಟೆ | 179 | 292 | 11 |
| ಗಂಡಗಟ್ಟ | 258 | 207 | 29 |
| ನಂದಿಗಾವೆ | 88 | 48 | |
| ಬಬ್ಬಂಜಿ ನುಗ್ಗಿ-1 | 158 | 206 | 8 |
| " -2 | 117 | 337 | 2 |
| ವಿದ್ಯಾರಣ್ಯಪುರ | 240 | 136 | 15 |
| ಹೆನ್ನಂಗಿ | 97 | 6 | 2 |
| ಮುಲೆನಾಡು | 82 | 71 | 15 |
| ಹೆರಣನೆ | 199 | 186 | 18 |
| ಹೆಗ್ಗಾರುಕುಡಿಗೆ | 175 | 132 | 7 |
| ಆಗಳಗಂಡಿ | 217 | 139 | 18 |
| ಹುಲಿಗರಡಿ | 138 | 67 | 19 |
| ಮೂರುಗದ್ದೆ | 137 | 341 | 2 |
| ಎಲೆಮಡಲು | 252 | 418 | 4 |
| ಅಡಿಗೆಬೈಲು | 95 | 161 | 2 |
| ಸಿ. ಆರ್. ಎಸ್. | 284 | 274 | 9 |
| ಮುದುಗುಣಿ | 150 | 64 | 7 |
| ಬಿ. ಕಣಬೂರು-1 | 235 | 452 | 10 |
| " -2 | 181 | 211 | 3 |
| ಬಾಳೆಹೊನ್ನೂರು | 179 | 357 | 27 |
| ಬಿ. ಕಣಬೂರು-4 | 187 | 285 | 6 |
| " -5 | 282 | 396 | 21 |
| ಶೀಗೋಡು | 243 | 187 | 4 |
| ಹೇರೂರು | 316 | 229 | 1 |
| ಗುಡ್ಡೇತೋಟ | 165 | 386 | 3 |
| ಶಾಂತಿಗ್ರಾಮ | 186 | 290 | 3 |
| ಭೈರೇದೇವರು | 90 | 93 | 13 |
| ಕಲ್ಲುಗುಡ್ಡೆ | 259 | 129 | 6 |
| ಬೆತ್ತದಕೊಳಲು | 137 | 104 | 2 |
| ಬಸರಿಕಟ್ಟೆ | 336 | 395 | 8 |
| ಹಲಸೂರು | 189 | 154 | 1 |

ಚಂದಾ ಹಣ ಕಳಿಸುವುದಾಗಿ ಹೇಳಿದ್ದ ಹಲವರು ಇನ್ನೂ ಕಳಿಸಿಲ್ಲ. ತುಂಬಾ ಬಾಕಿ ಇರುವವರಿಗೆ ಪತ್ರಿಕೆ ಕಳಿಸುತ್ತ ಹೋಗುವುದು ಕಷ್ಟವಾಗುತ್ತದೆ. ಆದರೆ ಚಂದಾ ಕೊಡುತ್ತೇವೆನಂದಿರುವುದರಿಂದ ಪತ್ರಿಕೆ ನಿಲ್ಲಿಸಲೂ ಆಗುವುದಿಲ್ಲ. ಸಹಕರಿಸಿ —ಸಂ.

# ಐದು ವರ್ಷ ಬೋಧಿಸಿಯೂ ಅನರ್ಹರೆ?

(2ನೇ ಪುಟದಿಂದ)

ಆದರೆ ಅದರಲ್ಲಿ ಸುಮಾರು 240 ಜನರನ್ನು ಆಯ್ಕೆ ಮಾಡಿ 130 ಜನರನ್ನು ವಾಪಾಸು ಮಾಡಲಾಯಿತು. ಖಾಲಿ ಬಿದ್ದ ಸ್ಥಾನಗಳಿಗೆ ಬೇರೆ ಜಿಲ್ಲೆಯವರನ್ನು ಆಯ್ಕೆ ಮಾಡಿ ದೈಹಿಕ ಶಿಕ್ಷಕರ 46 ಹುದ್ದೆಗಳನ್ನು ಖಾಲಿ ಬಿಡಲಾಗಿದೆ.

**ಅನ್ಯಾಯ**

ಹೀಗೆ ಕೈ ಬಿಟ್ಟ ಇವರೆಲ್ಲ ಮಂತ್ರಿಗಳನ್ನು, ಅಧಿಕಾರಿಗಳನ್ನು ಭೇಟಿ ಮಾಡುತ್ತಲೆ ಇದ್ದಾರೆ. ಈಗ ಏಟಕ್ ನೇತೃತ್ವದಲ್ಲಿ ಚಳುವಳಿಗೂ ಇಳಿಯುವುದರಲ್ಲಿದ್ದಾರೆ.

ಜಿಲ್ಲಾ ನೇಮಕಾತಿ ಸಮಿತಿಯ ಬಗ್ಗೆ ತೀವ್ರವಾದ ಭ್ರಷ್ಟಾಚಾರದ ಆರೋಪವನ್ನು ಇವರು ಮಾಡುತ್ತಾರೆ. ಅಲ್ಲದೆ, 1968ರಲ್ಲಿ ಕೇವಲ 9 ತಿಂಗಳಿಗಾಗಿ ಸ್ಥಳೀಯ ನೇಮಕಾತಿ ಹೊಂದಿದ ಶಿಕ್ಷಕರು ಹಾಗೇ ಮುಂದುವರಿದು ಅನಂತರ ಸಂದರ್ಶನ ಕೂಡ ಇಲ್ಲದೆ ಖಾಯಂ ಆದರು. ಹೀಗಿರುವಾಗ, ತಮಗೆ ಮಾತ್ರ ಕಡ್ಡಾಯ ಸಂದರ್ಶನ ಮತ್ತು ಅನರ್ಹತೆ ಏಕೆ? ಎಂದು ಅವರು ಕೇಳುತ್ತಾರೆ.

**ಇನ್ನೂ ಅನರ್ಹತೆಯೆ?**

ಒಮ್ಮೆ ಅರ್ಹರೆಂದು ಕ್ರಮಬದ್ಧವಾಗಿ ಆಯ್ಕೆಯಾಗಿ 5 ವರ್ಷಗಳ ಬೋಧನಾ ಅನುಭವ ಇರುವಾಗ ಪುನಃ ಸಂದರ್ಶನದ ಅಗತ್ಯವೇನು? ಇಷ್ಟು ವರ್ಷಗಳಲ್ಲಿ ಇವರ ಅರ್ಹತೆ ಸಹಜವಾಗಿ ಹೆಚ್ಚಿದೆ. ಅನರ್ಹರಾಗಿಯೇ ಉಳಿದಿದ್ದರೆ ಇಷ್ಟು ವರ್ಷ ಅವರು ಬೋಧಿಸಿದ್ದೇನು? ಇವರನ್ನು ಇಟ್ಟುಕೊಟ್ಟು ಸರ್ಕಾರ ನಮ್ಮ ಮಕ್ಕಳನ್ನು ಯಾವ ಗುಂಡಿಗೆ ತಳ್ಳಿತು? ಅದಕ್ಕೆ ಯಾರಿಗೆ ಶಿಕ್ಷೆ ಆಗಬೇಕು? ಹಂಗಾಮಿಯಾಗಿ ಬೇಕಾದರೆ ಇವರುಗಳು ಇನ್ನೂ ಎರಡೋ ನಾಲ್ಕು ವರ್ಷ ಇದ್ದರೂ ಆಗುತ್ತಿತ್ತು. ಖಾಯಂ ಎನ್ನಿಸಿಕೊಳ್ಳಲು ಆಗುವುದಿಲ್ಲವೆ?

ಇಲಾಖೆ ಇದನ್ನೆಲ್ಲ ಜವಾಬ್ದಾರಿಯಿಂದ ಯೋಚಿಸಿ, ಆಗಿರುವ ತಪ್ಪನ್ನು ಕೂಡಲೆ ಸರಿಪಡಿಸಬೇಕು.

# ಕೊಪ್ಪ ಇಂದಿರಾ ನಗರದ ನೀರಿನ ಸಮಸ್ಯೆಗೆ ತಾತ್ಕಾಲಿಕ ಪರಿಹಾರದ ಆಶ್ವಾಸನೆ

(ಮೊದಲ ಪುಟದಿಂದ)

ಎಂದರು. ಅವರ ಕ್ಷೇತ್ರದ ಪುರಸಭಾ ಸದಸ್ಯರುಗಳನ್ನೂ ಕರೆಯುವಂತೆ ಸೂಚಿಸಿದೆವು.

### ಭೇಟಿ

ಮರುದಿನ ಅವರ ಪ್ರದೇಶದ ಪುರಸಭಾ ಸದಸ್ಯರಿಗೂ ಅಧ್ಯಕ್ಷರಿಗೂ ಅಧಿಕಾರಿಗಳ ಜೊತೆ ಖುದ್ದು ಸ್ಥಳಕ್ಕೆ ಭೇಟಿ ಕೊಡುವಂತೆ ಸೂಚಿಸಿದೆವು. ಎಲ್ಲರೂ-ಸ್ವಲ್ಪ ಹೆಚ್ಚುಕಮ್ಮಿ ಅಂತೂ-ಬಂದರು. ನಿವಾಸಿಗಳು ಮತ್ತೊಂದು ಸಲ ತಮ್ಮ ಸಂಕಷ್ಟ ವಿವರಿಸಿದರು, ಕೆಲವು ನಿದರ್ಶನಗಳನ್ನು ತೋರಿಸಿದರು.

### ಸಮಸ್ಯೆಯ ಜಟಿಲತೆ

ಪೇಟೆಯಲ್ಲಿ ವಿದ್ಯುತ್ ಇದ್ದರೂ ಹರಿಹರಪುರ ಹೊಳೆಯ ಪಂಪ್ ಹೌಸ್‌ಗೆ ತಕ್ಕಷ್ಟು ವೋಲ್ಟೇಜಿನ ವಿದ್ಯುತ್ ಪೂರೈಕೆ ಹಲವು ಸಲ ಇಲ್ಲದಿರುವುದು, ಮುನ್ಸೂಚನೆ ಇಲ್ಲದೆ ವಿದ್ಯುತ್ ನಿಲುಗಡೆ ಆಗುವುದರಿಂದ ನೀರಿನ ಹಂಚಿಕೆಯಲ್ಲಿ ನಿಯಂತ್ರಣ ಮಾಡಿ ಸಾಕಷ್ಟು ಸಂಗ್ರಹ ಉಳಿಸಿಕೊಳ್ಳಲು ಆಗದಿರುವುದು, ಹಿರಿಕೆರೆಯ ನೀರು ಮಲಿನಗೊಂಡು ಉಪಯೋಗಕ್ಕಿಲ್ಲವಾಗಿರುವುದು – ಇತ್ಯಾದಿ ಸಮಸ್ಯೆಗಳನ್ನು ಅಧಿಕಾರ ವರ್ಗದವರು ವಿವರಿಸಿ, ಮುಂದಿನ ವರ್ಷ ಪರಿಸ್ಥಿತಿ ಖಂಡಿತ ಸುಧಾರಿಸಲಿದ್ದು, ಈ ವರ್ಷದ ಮಟ್ಟಿಗೆ ಎಲ್ಲ ನಾಗರೀಕರೂ ಪುರಸಭೆಯೊಂದಿಗೆ ಸಹಕರಿಸಬೇಕೆಂದು ಮನವಿ ಮಾಡಿದರು.

### ಆಶ್ವಾಸನೆ

ಪೂರ್ತಿ ಸುಸ್ಥಿತಿಯಲ್ಲಿಲ್ಲದ ಬೋರ್‌ವೆಲ್ ರಿಪೇರಿ, ಹೊಸದಾಗಿ ಸ್ಥಳ ಗುರುತಿಸಲ್ಪಟ್ಟಿರುವ ಬೋರ್‌ವೆಲ್‌ನ ತ್ವರಿತ ನಿರ್ಮಾಣ, ಒಡೆದು ಹೋಗಿರುವ ಒಂದು ನಲ್ಲಿಯ ಬದಲಾವಣೆ–ಇವುಗಳ ಬಗ್ಗೆ ತಕ್ಷಣ ಕ್ರಮ ತೆಗೆದುಕೊಳ್ಳುವುದಲ್ಲದೆ, ನಿಗದಿತ ವೇಳೆಯಲ್ಲಿ ನೀರು ಬಿಡಲಾಗದಿದ್ದರೆ ರಾತ್ರಿ 9ರ ನಂತರ ಅರ್ಧ ಗಂಟೆ ಕಾಲ ನೀರು ಬಿಟ್ಟು ತಕ್ಷಣದ ಅಗತ್ಯಕ್ಕೆ ಬೇಕಾದಷ್ಟು ನೀರು ಒದಗಿಸುವುದಾಗಿ ಆಶ್ವಾಸನೆ ಕೊಟ್ಟರು. ಹಾಗೂ ನೀರು ಪೋಲು ಮಾಡದಂತೆ ಎಲ್ಲರೂ ಎಚ್ಚರಿಕೆ ವಹಿಸಬೇಕೆಂದೂ ಮನವಿ ಮಾಡಿದರು.

### ಕರುಣಾಜನಕ

ಈಗಲೂ ಸಂಜೆ ಕೆಲಸ ಮುಗಿಸಿ ಮನೆಗೆ ಬಂದೊಡನೆ ಇಲ್ಲಿನ ನಿವಾಸಿಗಳು ಬಕೆಟ್, ಕೊಡಪಾನ ಹಿಡಿದುಕೊಂಡು ಆ ನಲ್ಲಿಯಿಂದ ಈ ನಲ್ಲಿಗೆ, ಈ ನಲ್ಲಿಯಿಂದ ಬೋರ್‌ವೆಲ್ಲಿಗೆ – ಹೀಗೆ ನೀರು ಹುಡುಕಿಕೊಂಡು ಗುಡ್ಡದ ಮೇಲೆಲ್ಲ ಅಲೆದಾಡುತ್ತಿರುವ ದೃಷ್ಯ ಕರುಣಾಜನಕವಾಗಿದೆ.

ನೀರು ಪೂರೈಕೆ ವ್ಯವಸ್ಥೆಯ ಮಹತ್ತರ ಸುಧಾರಣೆಗಾಗಿ ಪುರಸಭೆ ಸಿದ್ಧಪಡಿಸಿ ಮೇಲೆ ಕಳಿಸಿರುವ ಯೋಜನೆಗಳನ್ನು ತಕ್ಷಣ ಮಂಜೂರು ಮಾಡಿಸಿಕೊಳ್ಳುವುದೊಂದೇ ಈ ಸಮಸ್ಯೆಗೆ ಸರಿಯಾದ ಪರಿಹಾರವಾಗಬಲ್ಲುದು. ಸದ್ಯಕ್ಕೆ, ಈಗ ಕೊಟ್ಟ ಆಶ್ವಾಸನೆಗಳನ್ನು ತಕ್ಷಣ ಕಾರ್ಯಗತಗೊಳಿಸಬೇಕಾಗಿದೆ.

## ಸಗಣಿ ಅನಿಲ ಘಟಕಕ್ಕೆ ಸಿಮೆಂಟ್ ಪೂರೈಕೆ ವ್ಯವಸ್ಥೆ

(3ನೆ ಪುಟದಿಂದ)

ಒದಗಿ ವ್ಯವಸ್ಥೆ ಮಾಡುವುದಾಗಿ ಭರವಸೆ ಕೊಟ್ಟಿದ್ದಾರೆ. ಬಹುಶಃ ಟಿ.ಎ.ಪಿ.ಸಿ.ಎಂ.ಎಸ್. ಮೂಲಕ ಪೂರೈಕೆ ವ್ಯವಸ್ಥೆ ಆಗುವ ನಿರೀಕ್ಷೆಯಿದ್ದು, ಸ. ಅ. ಘಟಕ ಕಟ್ಟಿಸುತ್ತಿರುವ ಅಥವಾ ಕಟ್ಟಿಸುವ ಉದ್ದೇಶವಿರುವ ರೈತರು ಈ ವಿಷಯ ಗಮನದಲ್ಲಿಟ್ಟುಕೊಂಡು ಸೂಕ್ತವಾಗಿ ವ್ಯವಹರಿಸುವಂತೆ ಮೇಲ್ಕಂಡ ಅರ್ಜಿದಾರ ರೈತರು ಸೂಚಿಸಿದ್ದಾರೆ.

ಈ ಬಗ್ಗೆ ಏನಾದರೂ ಮಾಹಿತಿ–ಸಲಹೆ ಬೇಕಾದವರು ಶ್ರೀ ಕೆ.ಎಂ.ಶೇಷಪ್ಪ ನಾಯ್ಕ ಕಂಚಿನಕೆರೆ. ಶಾನುವಳ್ಳಿ ಅಂಚೆ, ಕೊಪ್ಪ ತಾ|| ಅಥವಾ ಶ್ರೀ ಹೆಗ್ಗಾರು ಜಯಂತ್, ನಿಲುವಾಗಿಲು ಅಂಚೆ, ಕೊಪ್ಪ ತಾ|| – ಇವರನ್ನು ಸಂಪರ್ಕಿಸಬಹುದು.

## ತಲಮಕ್ಕಿ ಪಂಚಾಯ್ತಿಗೆ ವಿಭಾಗ ಮಟ್ಟದಲ್ಲಿ ಎರಡನೇ ಸ್ಥಾನ

ಕೊಪ್ಪ: 1984–85ನೇ ಸಾಲಿಗೆ ಚಿಕ್ಕಮಗಳೂರು ಜಿಲ್ಲೆಯ 'ಅತ್ಯುತ್ತಮ ಪಂಚಾಯಿತಿ' ಪ್ರಶಸ್ತಿ ಗಳಿಸಿದ್ದ ತಲಮಕ್ಕಿ ಪಂಚಾಯಿತಿ ಮೈಸೂರು ವಿಭಾಗ ಮಟ್ಟದಲ್ಲಿ 2ನೇ ಸ್ಥಾನ ಗೆದ್ದಿದೆ. ಮೊದಲನೇ ಸ್ಥಾನ ಉಪ್ಪಿನಂಗಡಿ ಪಂಚಾಯ್ತಿಗೂ (ದ.ಕ.), 3ನೇ ಸ್ಥಾನ ಬರಗಿ ಪಂಚಾಯ್ತಿಗೂ (ಮೈಸೂರು ಜಿಲ್ಲೆ) ಲಭಿಸಿವೆ.

ತಲಮಕ್ಕಿ 1981–82ರಲ್ಲಿ ವಿಭಾಗ ಮಟ್ಟದ 3ನೇ ಸ್ಥಾನ ಗಳಿಸಿತ್ತು.

# ವಾ ರ್ಷಿ ಕೋ ತ್ಸ ವ ಗ ಳು

### ಅಡಿಗೆಬೈಲು

ಇಲ್ಲಿನ ಸರ್ಕಾರಿ ಹಿ. ಪ್ರಾ. ಶಾಲೆಯ ವಾರ್ಷಿಕೋತ್ಸವ ಫೆ. 28ರಂದು ಬಾಳೆಹೊನ್ನೂರು ವೈದ್ಯಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಶಾಲಾ ತನಿಖಾಧಿಕಾರಿಗಳಾದ ಬಿ. ವಿ. ಶಿವಮೂರ್ತಿ, ಬಿ.ಲಕ್ಷ್ಮೀನಾರಾಯಣ, ಮಾಜಿ ಪಂ|| ಅಧ್ಯಕ್ಷ ಗಣಪತಿ, ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷ ಎ. ಎಂ. ದುಗ್ಗಪ್ಪ ನಾಯಕ್ ಇವರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಎಂ. ಸಿದ್ದಲಿಂಗಯ್ಯ ಸ್ವಾಗತಿಸಿ, ಮುಖ್ಯೋಪಾಧ್ಯಾಯ ಸೂರ್ಯನಾರಾಯಣ ರಾವ್ ವರದಿ ಓದಿದರು. ಈಶ್ವರಪ್ಪ ವಂದನಾರ್ಪಣೆ ಮಾಡಿದರು.

### ಅಗಳಗಂಡಿ

ಇಲ್ಲಿನ ಸರ್ಕಾರಿ ಪ್ರೌಢಶಾಲೆಯ ವಾರ್ಷಿಕೋತ್ಸವ ಫೆ. 25ರಂದು ಪ್ರೌಢ ಶಾಲಾ ಸಮಿತಿ ಅಧ್ಯಕ್ಷ ಬಿ. ಹಾಲಪ್ಪ ಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು. ಸಮಾರಂಭದಲ್ಲಿ ಶೃಂಗೇರಿ ಪ್ರೌಢಶಾಲೆ ಮುಖ್ಯೋಪಾಧ್ಯಾಯರಾದ ವಿಜಯ ಕುಮಾರ್, ಜಯಪುರ ವಿದ್ಯಾ ಸಂಸ್ಥೆ ಅಧ್ಯಕ್ಷ ಕೆ. ಎಸ್. ಶ್ರೀನಿವಾಸ್, ಕೆ. ತಿಮ್ಮಪ್ಪಯ್ಯ, ಡಾ|| ಯು. ಎಸ್.ಯೋಗಪ್ಪ ಭಾಗವಹಿಸಿದ್ದರು. ಹೆಚ್. ಆರ್.ಬಸಪ್ಪ ಸ್ವಾಗತಿಸಿ ಎಂ.ವಿ.ಗಂಗಾಧರ ವಂದಿಸಿದರು.

## 'ಗಿರಿಸೌರಭ' ಸದ್ಯವೇ ಬಿಡುಗಡೆ

ಕೊಪ್ಪ: ಚಿಕ್ಕಮಗಳೂರಿನಲ್ಲಿ ನಡೆದ 2ನೇ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ವಾಚಿಸಲ್ಪಟ್ಟ ಕವನಗಳ ಸಂಕಲನ 'ಗಿರಿ ಸೌರಭ' ಸದ್ಯದಲ್ಲೇ ಬಿಡುಗಡೆಯಾಗಲಿದ್ದು, ಇದರಲ್ಲಿ ಮೈಸೂರು ವಿ. ವಿ. ನಿಲಯದ ಸಂಶೋಧಕ ಮಂಜಪ್ಪ ಶೆಟ್ಟಿ, ಮಾನವಿಕ ಸಂಪಾದಕ ಶ್ಯಾಂ ಸುಂದರ್ ಮುಂತಾದವರ ಕವನಗಳು ಪ್ರಕಟವಾಗಲಿವೆ. ಈ ಕೃತಿಯನ್ನು ಕನ್ನಡ ಅಭಿಮಾನಿಗಳು ಕೊಂಡು ಸಾಹಿತ್ಯ ಚಟುವಟಿಕೆಯನ್ನು ಪ್ರೋತ್ಸಾಹಿಸಬೇಕೆಂದು ಸಂಕಲನದ ಸಂಪಾದಕ/ಪ್ರಕಾಶಕ ಎಂ. ವಿ. ಗಂಗಾಧರ್ ಓದುಗರಲ್ಲಿ ವಿನಂತಿಸಿದ್ದಾರೆ. (ವಿಳಾಸ: ಶ್ರೀ ವಿನಾಯಕ ಪ್ರಕಾಶನ, ಗುಡ್ಡೇತೋಟ, ಕೊಪ್ಪ ತಾ||)

## ಏಲಕ್ಕಿ ಬೆಳೆಗಾರರ ಗಮನಕ್ಕೆ

ಏಲಕ್ಕಿ ಮಂಡಳಿಯ ವತಿಯಿಂದ ಏಲಕ್ಕಿ ಬೆಳೆಯ ವಿಚಾರ ಸಂಕಿರಣ, ಏಲಕ್ಕಿ ಗಿಡ ಮರು ನೆಡುವಿಕೆಗೆ ಸಹಾಯ ಧನ ನೀಡಿಕೆಯ ಉದ್ಘಾಟನೆ ಮತ್ತು ವಿದ್ಯಾರ್ಥಿಗಳಿಗೆ ಶೈಕ್ಷಣಿಕ ವೇತನದ ವಿತರಣೆಯನ್ನು ತಾ|| 18–3–'85ನೇ ಸೋಮವಾರ ಬೆಳಿಗ್ಗೆ 10 ಗಂಟೆಗೆ ಆರೂರು ಜಲಜಾಕ್ಷಮ್ಮ ಕಲ್ಯಾಣ ಮಂಟಪ, ಕೊಪ್ಪದಲ್ಲಿ ಏರ್ಪಡಿಸಲಾಗಿದೆ. ಏಲಕ್ಕಿ ಸಂಶೋಧನಾ ಸಂಸ್ಥೆಗಳ ವಿಜ್ಞಾನಿಗಳು ಇದರಲ್ಲಿ ಭಾಗವಹಿಸುವರು. ಎಲ್ಲಾ ಏಲಕ್ಕಿ ಬೆಳೆಗಾರರಿಗೂ ಆಹ್ವಾನ ಪತ್ರಿಕೆಗಳನ್ನು ಕಳಿಸಲು ಸಾಧ್ಯವಿಲ್ಲವಾದ್ದರಿಂದ ಇದನ್ನೇ ಆಮಂತ್ರಣ ಪತ್ರವೆಂದು ತಿಳಿದು ಎಲ್ಲಾ ಏಲಕ್ಕಿ ಬೆಳೆಗಾರರೂ ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕಾಗಿ ವಿನಂತಿ.

ಉಪ ನಿರ್ದೇಶಕರು,
ಏಲಕ್ಕಿ ಮಂಡಳಿ,
ಸಕಲೇಶಪುರ.


## 'ಮುಂಜಾವು' ಪತ್ರಿಕೆಯ ಮಾಲೀಕತ್ವ ಮತ್ತಿತರ ವಿವರ

ಫಾರಂ ನಂ. IV (ರೂಲ್ 8 ನೋಡಿ)

| | |
|---|---|
| 1. ಪ್ರಕಟಣೆಯ ಸ್ಥಳ | ಕೊಪ್ಪ, ಚಿಕ್ಕಮಗಳೂರು ಜಿಲ್ಲೆ. |
| 2. ಪ್ರಕಟಣೆಯ ಅವಧಿ | ವಾರಕ್ಕೊಮ್ಮೆ |
| 3. ಭಾಷೆ | ಕನ್ನಡ |
| 4. ಸಂಪಾದಕ, ಮುದ್ರಕ ಮತ್ತು ಪ್ರಕಾಶಕರ ಹೆಸರು, ರಾಷ್ಟ್ರ, ವಿಳಾಸ | ಸಿರಿಮನೆ ನಾಗರಾಜ್, ಭಾರತೀಯ, 129/1, ವೀರಭದ್ರಸ್ವಾಮಿ ರಸ್ತೆ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ, ಕರ್ನಾಟಕ. |
| 5. ಪತ್ರಿಕೆಯ ಮಾಲೀಕತ್ವ ಅಥವಾ ಪಾಲುದಾರಿಕೆ | ಪೂರ್ಣ ಮಾಲೀಕತ್ವ: ಸಿರಿಮನೆ ನಾಗರಾಜ್. |

ಮೇಲೆ ಕಾಣಿಸಿರುವ ವಿವರಗಳು ನನ್ನ ಗ್ರಹಿಕೆ ಮತ್ತು ವಿಶ್ವಾಸದ ಪ್ರಕಾರ ಸರಿಯಾಗಿವೆಯೆಂದು ಈ ಮೂಲಕ ಹೇಳುತ್ತಿದ್ದೇನೆ.

(ಸಹಿ) ಸಿರಿಮನೆ ನಾಗರಾಜ್
(ಪ್ರಕಾಶಕರ ಸಹಿ)

17–3–1985.


## ಅಭಿನಂದನೆ — ಕೃತಜ್ಞತೆ

ರಾಮಕೃಷ್ಣ ಹೆಗಡೆಯವರ ನೇತೃತ್ವದ ಜನತಾ ಪಕ್ಷದ ಸರ್ಕಾರದಲ್ಲಿ ಮತ್ತು ಶ್ರೀಯುತ ಹೆಚ್. ಜಿ. ಗೋವಿಂದ ಗೌಡರಲ್ಲಿ ಭರವಸೆಯಿಟ್ಟು, ತಾ|| 5–3–198 ರಂದು ನಡೆದ ವಿಧಾನ ಸಭಾ ಚುನಾವಣೆಯಲ್ಲಿ ಗೋವಿಂದ ಗೌಡರನ್ನು ಗೆಲ್ಲಿಸಿ ಶೃಂಗೇರಿ ಕ್ಷೇತ್ರದ ಮತದಾರರಿಗೆ, ಪಕ್ಷದ ಗೆಲುವಿಗೆ ಶ್ರಮಿಸಿದ ಕಾರ್ಯಕರ್ತರಿ ಹಾಗೂ ಸಹಕಾರ ನೀಡಿದ ಎಲ್ಲರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಹಾಗೂ ಶೃಂಗೇರಿ ಕ್ಷೇತ್ರದ ಶಾಸಕರಾಗಿ ಎರಡನೆಯ ಬಾರಿಗೆ ಚುನಾಯಿತರಾಗಿ ಈಗ ರಾಜ್ಯ ಸಚಿವರೂ ಆಗಿರುವ ಶ್ರೀಯುತ ಗೋವಿಂದ ಗೌಡರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಕಚ್ಚೋಡಿ ಶ್ರೀನಿವಾಸ್,
ಕಾರ್ಯದರ್ಶಿ,
ತಾಲ್ಲೂಕು ಜನತಾ ಪಕ್ಷ, ಶೃಂಗೇರಿ.